# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1593(1809)

ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 22.03.2021

ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರಸ್ತೆ ಹಾಗೂ ಇತರೆ ಅಭಿವೃದ್ಧಿ ಹೆಸರಿನಲ್ಲಿ ಮರಗಳನ್ನು ಕಡಿಯುತ್ತಿರುವುದು ಸರ್ಕಾರದ ಗಮನದಲ್ಲಿ ಇದೆಯೇ: | ರಾಜ್ಯದಲ್ಲಿ ರಸ್ತೆ ಹಾಗೂ ಇತರೆ ಅಭಿವೃದ್ಧಿ ಹೆಸರಿನಲ್ಲಿ ಮರಗಳನ್ನು ಕಡಿಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಪರಿಸರದ ಮಾರಣಹೋಮವನ್ನು ತಡೆಗಟ್ಟಲು ಸರ್ಕಾರದ ಆಲೋಚನೆಗಳೇನು: | ಪರಿಸರದ ಮಾರಣಹೋಮವನ್ನು ತಡೆಗಟ್ಟಲು ನಿಯಮಾನುಸಾರ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಗುತ್ತಿದೆ.<br>1. ರಸ್ತೆ ಹಾಗೂ ಇತರೆ ಅಭಿವೃದ್ಧಿ ಯೋಜನೆಗಳಿಗಾಗಿ ಅರಣ್ಯ ಭೂಮಿಯನ್ನು ಉಪಯೋಗಿಸಲು ಅರಣ್ಯ (ಸಂರಕ್ಷಣೆ) ಕಾಯ್ದೆ, 1980ರಡಿಯಲ್ಲಿ ಕೇಂದ್ರ/ ರಾಜ್ಯ ಸರ್ಕಾರದಿಂದ ಪೂರ್ವಾನುಮೋದನೆ ಪಡೆದ ನಂತರ, ಸದರಿ ಯೋಜನಾ ಪ್ರದೇಶದಲ್ಲಿ ಅತ್ಯವಶ್ಯವಾಗಿ ಕಡಿಯಲೇ ಬೇಕಾದ ಮರಗಳನ್ನು ಮಾತ್ರವೇ ಕಟಾವಣೆ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br>2. ಮಾನ್ಯ ಸರ್ವೋಚ್ಛ ನ್ಯಾಯಾಲಯವು ರಿಟ್ ಪಿಟಿಷನ್ (ಸಿವಿಲ್) ಸಂಖ್ಯೆ:202/1995ರಲ್ಲಿ ದಿನಾಂಕ 29-10-2002, 28-03-2008, 28-04-2008 ಮತ್ತು 09-05-2008 ರಂದು ನೀಡಿದ ಆದೇಶ/ ನಿರ್ದೇಶನದಂತೆ ಬಿಡುಗಡೆ ಮಾಡುವ ಅರಣ್ಯ ಭೂಮಿಯ ವಿಸ್ತೀರ್ಣಕ್ಕೆ ನಿಗದಿಪಡಿಸಿದ ನಿವ್ವಳ ಪ್ರಸ್ತುತ ಮೌಲ್ಯ **(Net Present Value)**ವನ್ನು ಉಪಯೋಗಿ ಸಂಸ್ಥೆಯಿಂದ ಭರಿಸಿಕೊಂಡು ಸದರಿ ಮೊತ್ತವನ್ನು ಅರಣ್ಯ ರಕ್ಷಣೆ, ಸಂರಕ್ಷಣೆ ಹಾಗೂ ಸಂಬಂಧಿತ ಚಟುವಟಿಕೆಗಳಿಗಾಗಿ ವೆಚ್ಚ ಮಾಡಲಾಗುತ್ತಿದೆ.<br>3. ಬಿಡುಗಡೆ ಮಾಡುವ ಅರಣ್ಯ ಭೂಮಿಗೆ ಸಮನಾದ ವಿಸ್ತೀರ್ಣದ ಅರಣ್ಯೇತರ ಭೂಮಿಯನ್ನು ಪರಿಹಾರಾತ್ಮಕ ನೆಡುತೋಪು ಬೆಳೆಸಲು ಉಪಯೋಗಿ ಸಂಸ್ಥೆಯು ಅರಣ್ಯ ಇಲಾಖೆಗೆ ವರ್ಗಾವಣೆ ಮಾಡಿಕೊಡಬೇಕಾಗಿರುತ್ತದೆ. ಅಲ್ಲದೇ, ಸದರಿ ಅರಣ್ಯೇತರ ಜಮೀನಿನಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸಿ ಅದನ್ನು ಹತ್ತು (10) ವರ್ಷಗಳ ಕಾಲ ಪೋಷಣೆ ಮಾಡಲು ತಗಲುವ ವೆಚ್ಚವನ್ನು ಉಪಯೋಗಿ ಸಂಸ್ಥೆಯಿಂದ ಭರಿಸಿ ಪರಿಹಾರಾತ್ಮಕ ನೆಡುತೋಪು ಬೆಳೆಸಲಾಗುತ್ತಿದೆ. |

| | | |
|---|---|---|
| | | 4. ಇದಲ್ಲದೇ, ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಮರಗಳನ್ನು ತೆರವುಗೊಳಿಸಿದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ 168 ಎಫ್‌ಡಿಪಿ 2017 ದಿನಾಂಕ 06.12.2018 ಹಾಗೂ 08.10.2020 ರನ್ವಯ ಉಪಯೋಗಿ ಸಂಸ್ಥೆಯಿಂದ ರಸ್ತೆ ಬದಿ ನೆಡುತೋಪು ನಿರ್ಮಾಣದ ಬಾಬ್ತು ನಿಗದಿತ ಮೊತ್ತವನ್ನು ಪಡೆದು ರಸ್ತೆ ನಿರ್ಮಾಣ ಯೋಜನೆಗಳಲ್ಲಿ ಬಿಡುಗಡೆ ಮಾಡುವ ಅರಣ್ಯ ಪ್ರದೇಶದ ವಿಸ್ತೀರ್ಣದ ಎರಡೂ ಬದಿಗಳಲ್ಲಿ ರಸ್ತೆ ಬದಿ ನೆಡುತೋಪು ನಿರ್ಮಿಸಲಾಗುತ್ತಿದೆ. |
| ಇ) | ಮರಗಳನ್ನು ಕಡಿಯುವ ಬದಲು ಸ್ಥಳಾಂತರಿಸುವ ಅಥವಾ ಬೇರೆ ರೀತಿ ಯೋಜನೆ ಮಾಡುವ ಕುರಿತು ಸರ್ಕಾರದ ನಿಲುವೇನು: | ಕಡಿಯಲು ಉದ್ದೇಶಿಸಿರುವ ಮರಗಳು ಆರೋಗ್ಯಕರವಾಗಿದ್ದಲ್ಲಿ ಹಾಗೂ ಬದುಕುಳಿಯುವ ಸಾಧ್ಯತೆಗಳಿದ್ದಲ್ಲಿ ಅಂತಹ ಮರಗಳನ್ನು ಗುರುತಿಸಿ ಸ್ಥಳಾಂತರಿಸಲಾಗುತ್ತದೆ. |
| ಈ) | ಒಟ್ಟಾರೆ ಪರಿಸರ ಸಂರಕ್ಷಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಇಲಾಖಾ ವತಿಯಿಂದ ಹಲವಾರು ಯೋಜನೆಗಳಡಿ ಅರಣ್ಯೀಕರಣ ಕಾಮಗಾರಿಗಳನ್ನು ಕೈಗೊಂಡು ನೆಡುತೋಪು ನಿರ್ಮಿಸಿ ನಿರ್ವಹಣೆ ಮಾಡಲಾಗುತ್ತಿದೆ. ಸಾರ್ವಜನಿಕರು ಹಾಗೂ ರೈತರು ಗಿಡಗಳನ್ನು ಬೆಳಸುವುದನ್ನು ಉತ್ತೇಜಿಸಲು ಕೃಷಿ ಅರಣ್ಯ ಪ್ರೋತ್ಸಾಹ ಯೋಜನೆಯಡಿ ಫಲಾನುಭವಿಗಳಿಗೆ ಇಲಾಖಾ ವತಿಯಿಂದ ಪ್ರೋತ್ಸಾಹಧನ ನೀಡಲಾಗುತ್ತಿದೆ. |

**ಸಂಖ್ಯೆ: ಅಪಜೀ 39 ಎಫ್‌ಎಎಫ್ 2021**

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು